॥ ಓಂ ಮಲೆಯಾಳ ಭಗವತಿ ಪ್ರಸನ್ನ॥

ಒಂದು ದಿನದಿಂದ ಹದಿನಾರು ವರ್ಷದವರೆಗೆ

# ಬಾಲಗ್ರಹ

ಮತ್ತು

# ಗರ್ಭಿಣೀ ಚಿಕಿತ್ಸೆ



# ಬಾಲಗ್ರಹ ಮತ್ತು ಗರ್ಭಿಣೀ ಚಿಕಿತ್ಸೆ

ದಿನ 1, ತಿಂಗಳು 1, ವರ್ಷ ಒಂದು ಆದ ಶಿಶುವಿಗೆ "ಕಾಪಿಲ್" ನಂಬ ದೇವತೆ ಹಿಡಿಯುವಳು. ಆದರ ಚೇಷ್ಟೆ ಶ್ವಾಸಶ್ವಾಸದಿಂದ ಅಳುವುದು, ಜ್ವರ ಬರುವುದು, ತುಳ್ಳೆ ಉರಿಯುವುದು, ಮೊಲೆಯುಣ್ಣದು, ಚೀರುವುದು. ಇದಕ್ಕೆ ಬಲಿ ಎರಡು ದಡದ ಕಾಲುವೆ






ಮಣ್ಣನ್ನು ತಂದು, ಹೆಣ್ಣು ಬೊಂಬೆಯಂ ಮಾಡಿ, ಕೆಂಪು ಹೊಸ ವಸ್ತ್ರವಂ ಉಡಿಸಿ, ಬಿಲ್ಲಂ ಹಿಡಿಸಿ, ಹೊಸ ಶಾವೆಯಲ್ಲಿರಿಸಿ. ಮೊಸರೋಗರದ ಎಳ್ಳು ಸೂಸಲು, ಐದು ಬಗೆಯ ಮೇಲೋಗರ, 4 ದೀಪ, 4 ಪಟ, ಕೆಂಪು ಗಂಧದ ಅಕ್ಷತೆ ಹೂಗಳಿಂದ ಷೋಡಶೋಪಚಾರ ಪೂಜೆಯಂ ಮಾಡಿ, ತಾಂಬೂಲ 5, ದಕ್ಷಿಣೆ 5 ಸಹ ಇರಿಸಿ 3 ದಿನ ಊರಿಗೆ ಪೂರ್ವದಲ್ಲಿ ಬಸರೀ ಮರದ ಕೆಳಗೆ ಬಲಿಯಂ ಕೊಡುವುದು. ಇದಕ್ಕೆ ಮಂತ್ರ "ಓಂ ನಮೋ ಭಗವತಿ ಕಾಪಾಲಿ ಏಹಿಏಹಿ ಬಾಲಕಂ ಮುಂಚ ಮುಂಚ ಸ್ವಾಹಾ" ಎಂದು ಚೀಟಿ ಬರೆದು ಇಡುವುದು. ಇದಕ್ಕೆ ಧೂಪ ಹಾಕುವುದು, ಮಜಿಷ್ಟೆ, ಹರಿದಳ; ಬಜೆ ಇವುಗಳನ್ನು ನೀರಿನಲ್ಲಿ ಅರೆದು ಶಿಶುವಿಗೆ ಲೇಪ ಹಾಕಿ, ಪಂಚಪಲ್ಲವದ ನೀರಿನಲ್ಲಿ ಪ್ರೋಕ್ಷಿಸಿ, ಯಂತ್ರ ಕಟ್ಟುವುದು.

ದಿನ 2, ತಿಂಗಳು 2, ವರ್ಷ 2 ಆದ ಶಿಶುವಿಗೆ "ನಂದಿನಿ" ಎಂಬ ದೇವತೆ ಹಿಡಿಯುವಳು. ಆದರ ಚೇಷ್ಟೆ ಜ್ವರ, ಕಣ್ಣು ಮುಚ್ಚುವುದು, ಅಬ್ಬರಿಸಿ ಅಳುವುದು,






ಕೆಮ್ಮುವುದು, ಕೈಕಾಲು ಬಡಿಯುವುದು. ಇದಕ್ಕೆ ಬಲಿ ಎರಡು ದಡದ ಕಾಲುವೆ ಮಣ್ಣನ್ನು ತಂದು, ಬೊಂಬೆಯು ಮಾಡಿ, ಕತ್ತಿಯಂ ಹಿಡಿಸಿ, ಹಳದಿ ವಸ್ತ್ರವಂ ಹಿಡಿಸಿ ಮೊಸರೋಗರದ 12 ಬೆಲ್ಲ, ಉದ್ದಿನವಡೆ, 12 ಕರ್ಜಿಕಾಯಿ, 15 ಸುಂಕೀನುಂಡೆ, 7 ಪಟ, 4 ದೀಪ, 5 ತಾಂಬೂಲ, 5 ದಕ್ಷಿಣೆ ಇರಿಸಿ, ಹಳದಿ ಹೂ ಗಂಧಾಕ್ಷತೆಯಿಂದ ಷೋಡಶೋಪಚಾರ ಪೂಜೆಯಂ ಮಾಡಿ 5 ದಿನ ಊರಿಗೆ ನೈರುತ್ಯ ದಿಕ್ಕಿನಲ್ಲಿ ತಾಳೀ ಮರದ ಬುಡದಲ್ಲಿ ಬಲಿಯನ್ನಿಡುವುದು. ಇದಕ್ಕೆ ಮಂತ್ರ "ಓಂ ನಮೋ ಭಗವತಿ ಸುನಂದಿನಿ ಏಹಿ ಏಹಿ ಬಾಲಕಂ ಮುಂಚ ಮುಂಚ ಸ್ವಾಹಾ" ಎಂದು ಚೀಟಿ ಬರೆದು ಬಲಿಯ ಮೇಲಿಟ್ಟು, ಪಂಚಪಲ್ಲವದ ನೀರು ಪ್ರೋಕ್ಷಿಸಿ, ಟಗರಿನ ಕೊಂಬು,

ಹಾವಿನ ಪೊರೆ, ಹಸುವಿನ ಬಾಲದ ಕೂದಲು ಇವುಗಳನ್ನು ಶಿಶುವಿಗೆ ಧೂಪ ಹಾಕಿ, ಈ ಯಂತ್ರವನ್ನು ಕಟ್ಟುವುದು.

ದಿನ 3, ತಿಂಗಳು 3, ವರ್ಷ 3 ಆದ ಶಿಶುವಿಗೆ "ಪೂತನಿ" ಎಂಬ ದೇವತೆ ಹಿಡಿಯುವಳು. ಇದರ ಚೇಷ್ಟೆ ಜ್ವರ, ಭೇದಿ, ಹಲ್ಲು ಕಡಿಯುವುದು, ಮೈ ಮುರಿಯುವುದು, ಮೊಲೆಯುಣ್ಣದಿದ್ದುದು. ಇದಕ್ಕೆ ಬಲಿ ಹೆಣ್ಣು ಬೊಂಬೆಯಂ ಮಾಡಿ, ಗದೆಯಂ ಹಿಡಿಸಿ, ಹಳದಿ






ವಸ್ತ್ರವಂ ಉಡಿಸಿ, ಮೊಸರೋಗರ, ಬೆಲ್ಲ 12, ಶಾವಿಗೆ, ಪಾಯಸ ಹೋಳಿಗೆ 3 ಪಂಚಕಜ್ಜಾಯ 3 ಬಗೆಯ ಗುಗ್ಗುರಿ, ಪಟ 5, ದೀಪ, ತಾಂಬೂಲ 5 ದಕ್ಷಿಣೆ ಇರಿಸಿ ಷೋಡಶೋಪಚಾರ ಪೂಜೆಯಂ ಮಾಡಿ, ಮೂರು ದಿನ ಬಲಿಯಂ ಕೊಡುವುದು. ಇದಕ್ಕೆ ಮಂತ್ರ "ಓಂ ನಮೋ ಭಗವತಿ ಪೂತನಿ ಏಹಿ ಏಹಿ ಬಾಲಕಂ ಮುಂಚ ಮುಂಚ ಸ್ವಾಹಾ" ಎಂದು ಬರೆದು ಲೇಪ ಹಾಕಿ ಕಟ್ಟುವುದು.

ದಿನ 4, ತಿಂಗಳು 4, ವರ್ಷ 4 ಆದ ಶಿಶುವಿಗೆ "ದುರ್ಮುಖಿ" ಎಂಬ ದೇವತೆ ಹಿಡಿಯುವಳು. ಇದರ ಚೇಷ್ಟೆ ಭೇದಿ, ಕಣ್ಣು ಮುಚ್ಚುವುದು, ನಡುಗುವುದು. ಇದಕ್ಕೆ ಬಲಿ ಹೆಣ್ಣು ಬೊಂಬೆಯಂ ಮಾಡಿ, ಹೊಸ ಕಪ್ಪು ವಸ್ತ್ರವ ಉಡಿಸಿ, ಮೊಸರೋಗರ, ಬೆಲ್ಲ 8, ಹೋಳಿಗೆ 3, ಗುಗ್ಗರಿ 5, ಪಟ 5, ದೀಪ 5, ದಕ್ಷಿಣೆ 5, ತಾಂಬೂಲ, ಕಪ್ಪು ಗಂಧಾಕ್ಷತೆಗಳಿಂದ ಪೂಜೆಯಂ ಮಾಡಿ, "ಓಂ ನಮೋ ಭಗವತಿ ದುರ್ಮುಖಿ ಏಹಿ ಏಹಿ ಬಾಲಕಂ ಮುಂಚ ಮುಂಚ ಸ್ವಾಹಾ" ಎಂದು ಚೀಟಿ ಬರೆದು ಮಡಗಿ, 2 ದಿನ ಬಲಿಯಂ ಹಾಕಿ, ಊರಿಗೆ





ವಾಯುವ್ಯ ದಿಕ್ಕಿನಲ್ಲಿ ಹುಣಸೇ ಮರದ ಬುಡದಲ್ಲಿ ಇಡುವುದು. ಪಂಚಪಲ್ಲವದ ನೀರು ಪ್ರೋಕ್ಷಿಸಿ, ಆನೆ ದಂತವನ್ನು ಧೂಪ ಹಾಕಿ ಹಾವಿನ ಪೊರೆ, ಸಾಸುವೆ ಲೇಪ ಹಾಕಿ ಅನಂತರ ಈ ಯಂತ್ರವನ್ನು ಕಟ್ಟುವುದು.

ದಿನ 5, ತಿಂಗಳು 5, ವರ್ಷ 5 ಆದ ಶಿಶುವಿಗೆ "ವಿರಾಳಿಕೆ" ಎಂಬ ದೇವತೆ ಹಿಡಿಯುವಳು. ಇದರ ಚೇಷ್ಟೆ ಜ್ವರ, ಬಾಯಾರಿಕೆ, ಬಿಕ್ಕಳಿಕೆ, ಅಳು, ಮೈಭಾರವು, ಕಣ್ಣೀರು

ಸ್ಫುರಿಸುವುದು, ಮೈನಾರುವುದು, ಬಡವಾಗುವುದು. ಇದಕ್ಕೆ ಬಲಿ ಉತ್ತರವಾಗಿ ಹರಿಯುವ ಕಾಲುವೆ ದಡದ ಮಣ್ಣು ತಂದು, ನಾಯಿ ಮುಖದ ಹಾಗೆ ಹೆಣ್ಣು ಬೊಂಬೆಯಂ ಮಾಡಿ, 8 ಬಾಲು ಮಾಡಿ, ಕೈಗೆ ಚೂರಿಯಂ ಕೊಟ್ಟು ಹಳದಿ ವಸ್ತ್ರವಂ ಉಡಿಸಿ, ಮೊಸರನ್ನ, ಕಡುಬು






10, ಬೆಲ್ಲದ ದೀಪ 4, ತಾಂಬೂಲ, ದಕ್ಷಿಣೆ 4, ಹಳದಿ ಗಂಧಾಕ್ಷತೆಗಳಿಂದ ಪೂಜೆಯಂ ಮಾಡಿ, 'ಓಂ ನಮೋ ಭಗವತಿ ನಿರಾಳಿಕೆ ಏಹಿ ಏಹಿ ಬಾಲಕಂ ಮುಂಚ ಮುಂಚ ಸ್ವಾಹಾ' ಎಂದು ಚೀಟಿ ಬರೆದು ಮಡಗಿ, 2 ದಿನ ಬಲಿಯಂ ಕೊಡುವುದು, ಬಡುವಲಾಗಿ ಬೇವಿನ ಮರದ ಬುಡದಲ್ಲಿ ಬಲಿಯಂ ಇಟ್ಟು, ಪಂಚಪಲ್ಲವದ ನೀರು ಪ್ರೋಕ್ಷಿಸಿ, ಬಜೆ, ಟಗರಿನ ಕೊಂಬು ಧೂಪ ಹಾಕಿ ಮೆಣಸಿನ ಬಜೆ ಅರೆದು, ಲೇಪ ಹಾಕಿ ಯಂತ್ರ ಕಟ್ಟುವುದು.

ದಿನ 6, ತಿಂಗಳು 6, ವರ್ಷ 6, ಶಿಶುವಿಗೆ "ಶಂಕಿನಿ" ದೇವತೆ ಹಿಡಿಯುವಳು. ಅದರ ಚೇಷ್ಟೆ ಜ್ವರ, ಕಣ್ಣು ಮುಚ್ಚುವುದು, ಭೇದಿ ಆಗುವುದು, ಬೆಚ್ಚುವುದು, ಹಾಲು ಕುಡಿಯದು.





ಇದಕ್ಕೆ ಬಲಿ ಹುತ್ತದ ಮಣ್ಣಿನಿಂದ ಹೆಣ್ಣು ಬೊಂಬೆಯು, ಮಾಡಿ, ತ್ರಿಶೂಲವಂ ಕೊಟ್ಟು, ನೀಲಿ ವಸ್ತ್ರ, ಮೊಸರು ಹೋಳಿಗೆ, ಪಟ 7, ದೀಪ, ತಾಂಬೂಲ, ದಕ್ಷಿಣೆ 8, ನೀಲ ಗಂಧಾಕ್ಷತೆಗಳಿಂದ ಪೂಜಿಸಿ, "ಓಂ ನಮೋ ಭಗವತಿ ಶಂಕಿನಿ ಏಹಿ ಏಹಿ ಬಾಲಕಂ ಮುಂಚ ಮುಂಚ ಸ್ವಾಹಾ" ಎಂದು ಬರೆದು ಇರಿಸಿ, ಪಡುವಲ ದಿಕ್ಕಿನಲ್ಲಿ ಕಣಿಗಿಲ ಗಿಡದ ಕೆಳಗೆ 3 ದಿನ ಬಲಿಯಂ ಹಾಕಿ, ಪಂಚಪಲ್ಲವದ ನೀರು ಪ್ರೋಕ್ಷಿಸಿ, ಗುಗ್ಗಳ ಬಳೀ ಸಾಸುವೆ ಶಿಶುವಿಗೆ ಧೂಪ ಹಾಕಿ, ಆನೆ ದಂತವನ್ನಗೆ ಲೇಪ ಹಾಕಿ, ಈ ಯಂತ್ರ ಕಟ್ಟುವುದು.

ದಿನ 7, ತಿಂಗಳು 7, ವರ್ಷ 7 ಆದ ಶಿಶುವಿಗೆ "ಸಿಂಹಿಕಾ" ಎಂಬ ದೇವತೆ ಹಿಡಿಯುತವಳು. ಅದರ ಚೇಷ್ಟೆ ಜ್ವರ, ಕಣ್ಣು ಮುಚ್ಚುವುದು, ಬಿಕ್ಕಳಿಕೆ, ಹಾಲು ಕುಡಿಯದೆ

ಹೊರಳುವುದು. ಇದಕ್ಕೆ ಅಕ್ಕಿ ಹಿಟ್ಟಿನಲ್ಲಿ ಹೆಣ್ಣು ಬೊಂಬೆಯಂ ಮಾಡಿ, ಚಟುಪಟಿಕೆಯಂ ಕೊಟ್ಟು, ಕೆಂಪು ವಸ್ತ್ರ, ಮೊಸರನ್ನ ಪಂಚಕಜ್ಜಾಯ ಹೋಳಿಗೆ 5, ಪಟ 3, ದಕ್ಷಿಣೆ, ತಾಂಬೂಲ 7, ಕೆಂಪು ಗಂಧಾಕ್ಷತೆಗಳಿಂದ ಪೂಜಿಸಿ. "ಓಂ ನಮೋ ಭಗವತಿ ಸಿಂಹಿಕಾ ಏಹಿಏಹಿ ಬಾಲಕಂ






ಮುಂಚ ಮುಂಚ ಸ್ವಾಹಾ" ಎಂದು ಚೀಟಿ ಬರೆದು ಇರಿಸಿ, ಈಶಾನ್ಯ ದಿಕ್ಕಿನಲ್ಲಿ ಎಕ್ಕದ ಗಿಡದ ಬುಡದಲ್ಲಿ 5 ದಿನ ಬಲಿಯ ಹಾಕಿ ಪಂಚ ಪಲ್ಲವದ ನೀರು ಪ್ರೋಕ್ಷಿಸಿ. ಹುಲಿ ಉಗುರು, ಕೈ ಉಗುರು, ಬೆಂಗಳಕೋಶ ಶಿಶುವಿಗೆ ಧೂಪ ಹಾಕಿ ಬಜೆ ಬೆಂಗಳಕೋಷ್ಠ, ಅರೆದು, ಲೇಪ ಹಾಕಿ, ಈ ಯಂತ್ರ ಕಟ್ಟುವುದು.

ದಿನ 8, ತಿಂಗಳು 8, ವರ್ಷ 8 ಆದ ಶಿಶುವಿಗೆ "ಬ್ರಾಹ್ಮಿಣಿ" ಎಂಬ ದೇವತೆ ಹಿಡಿಯುವಳು. ಅದರ ಲಕ್ಷಣ ಜ್ವರ, ಕೆಮ್ಮು ಅಳುವುದು, ಚಂಡಿತನ. ಇದಕ್ಕೆ ಆಗ್ನಿ ದಿಕ್ಕಿನಲ್ಲಿ ಹರಿಯುವ ಕಾಲುವೆ ದಡದ ಮಣ್ಣಿನಿಂದ ಬೊಂಬೆ ಮಾಡಿ, ಬಿಲ್ಲಂ ಹಿಡಿಸಿ, ವಸ್ತ್ರವನ್ನುಡಿಸಿ, ಜೋಳದ ಹುಗ್ಗಿ, ಮೊದಲು ಬಾಳೆಹಣ್ಣು 25, ಗುಗ್ಗರಿ ಫಲ 2, ದೀಪ ದಕ್ಷಿಣೆ, ತಾಂಬೂಲ





8, ಅಷ್ಟಗಂಧ ಬಿಳಿ ಹೂ ಗಂಧಾಕ್ಷತೆಗಳಿಂದ ಪೂಜಿಸಿ "ಓಂ ನಮೋ ಭಗವತಿ ಬ್ರಾಹ್ಮಿಣೀ ಏಹಿಏಹಿ ಬಾಲಕಂ ಮುಂಚ ಮುಂಚ ಸ್ವಾಹಾ" ಎಂದು ಚೀಟಿ ಬರೆದು, ಉತ್ತರ ದಿಕ್ಕಿನಲ್ಲಿ ಬಿಲ್ವ ಮರದ ಬುಡದಲ್ಲಿ ಮಡಗಿ, 8 ದಿನ ಪಂಚಪಲ್ಲವದ ನೀರು ಪ್ರೋಕ್ಷಿಸಿ ಅನಂತರ ಧೂಪ ಹಾಕಿ, ಬಜೆ, ಗಂಧ ಲೇಪಿಸಿ ಈ ಯಂತ್ರ ಕಟ್ಟುವುದು.

ದಿನ 9, ತಿಂಗಳು 9, ವರ್ಷ 9 ಆದ ಶಿಶುವಿಗೆ "ರೋಹಿಣಿ" ಎಂಬ ದೇವತೆ ಹಿಡಿಯುವಳು. ಅದರ ಚೇಷ್ಟೆ ಜ್ವರ, ಅಳುವುದು, ಹೊರಳುವುದು, ಭೇದಿ, ನಡುಗುವುದು. ಇದಕ್ಕೆ ಬಿಳಿ ಕರೀ ಮಣ್ಣಿನಿಂದ ಬೊಂಬೆಯಂ ಮಾಡಿ ಹಳದಿ ವಸ್ತ್ರ, ತ್ರಿಶೂಲಂ ಕೊಟ್ಟು ಶಿಶುವಿಗೆ ಪಾಯಸ ಮೊಸರನ್ನ, ತುಪ್ಪ, ಕಜ್ಜಾಯ, ಪಟ 9, ತಾಂಬೂಲ ದಕ್ಷಿಣೆ 9, ಹಳದಿ



ಪುಷ್ಪ ಗಂಧಾಕ್ಷತೆಯಿಂದ ಪೂಜಿಸಿ, "ಓಂ ನಮೋ ಭಗವತಿ ರೋಹಿಣಿ ಏಹಿ ಏಹಿ ಬಾಲಕಂ ಮುಂಚ ಮುಂಚ ಸ್ವಾಹಾ" ಎಂದು ಚೀಟಿ ಬರೆದು ಇರಿಸಿ ನೈಋತ್ಯ ದಿಕ್ಕಿನಲ್ಲಿ ಆಲದ ಮರದ






ಬುಡದಲ್ಲಿ ಒಂದು ದಿನ ಬಲಿ ಹಾಕಿ ಬನ್ನೀ ಮರದ ಬೇರಿನ ಗಂಧದಿಂದ ಲೇಪ ಹಾಕಿ ಈ ಯಂತ್ರ ಕಟ್ಟುವುದು.

ದಿನ 10, ತಿಂಗಳು 10, ವರ್ಷ 10 ಆದ ಶಿಶುವಿಗೆ "ರೇವತಿ" ಎಂಬ ದೇವತೆ ಹಿಡಿಯುವಳು. ಅದರ ಚೇಷ್ಟೆ ಜ್ವರ, ಆಕಳಿಕೆ, ಬಾಯಲ್ಲಿ ನೊರೆ, ಹೊಟ್ಟೆಯುಬ್ಬರ, ಮೊಲೆಯುಣ್ಣಲ್ಲದು. ಇದಕ್ಕೆ ಬಲಿ ಕಾಲುವೆ ಮಣ್ಣಿನಿಂದ ಹೆಣ್ಣು ಬೊಂಬೆಯಂ ಮಾಡಿ, ಹಸಿರು ವಸ್ತ್ರ, ಡಮರುಗ ತುಪ್ಪ, ಅನ್ನ, ಮೊಸರು, ಎಳ್ಳು ಸೂಸಲು ಸುಕ್ಕಿನುಂಡೆ 10, ಪಟ4, ದೀಪ 4, ತಾಂಬೂಲ, ದಕ್ಷಿಣೆ 5, ಪುಷ್ಪ ಗಂಧಾಕ್ಷತೆಯಿಂ ಪೂಜಿಸಿ, "ಓಂ ನಮೋ ಭಗವತಿ






ರೇವತಿ ಏಹಿಏಹಿ ಬಾಲಕಂ ಮುಂಚ ಮುಂಚ ಸ್ವಾಹಾ" ಎಂದು ಚೀಟಿ ಬರೆದು ಪೂರ್ವ ದಿಕ್ಕಿನಲ್ಲಿಟ್ಟು ಬ್ರಹ್ಮದೇವತಾ ಪೂಜಿಸಿ ಅರಳೀಮರದ ಬುಡದ ಬಳಿ ಬ್ರಾಹ್ಮಣರ ಊಟ ಮಾಡಿಸಿ, ನೀರು ಪ್ರೋಕ್ಷಿಸಿ ಗುಗ್ಗುಳ ಧೂಪ ಹಾಕಿ, ತಾಮ್ರ ಬಡೆ, ಗಂಧ ಲೇಪಿಸಿ ಈ ಯಂತ್ರ ಕಟ್ಟುವುದು.

ದಿನ 11, ತಿಂಗಳು 11, ವರ್ಷ 11 ಆದ ಶಿಶುವಿಗೆ "ಶೃಂಗಪಿಂಗಳ" ಎಂಬ ದೇವತೆ ಹಿಡಿಯುವಳು. ಇದರ ಚೇಷ್ಟೆ ಜ್ವರ, ಬಡವಾಗುವುದು, ಮೇಲೆ ನೋಟ, ಕೆಮ್ಮು ಮೊಲೆಯುಣ್ಣದು. ಇದಕ್ಕೆ ಬಲಿ ಮೂಡಲಾಗಿ ಹರಿಯುವ ಕಾಲುವೆ ಮಣ್ಣಿನಿಂದ ಬೊಂಬೆಯಂ ಮಾಡಿ, ಬಿಳಿ ವಸ್ತ್ರ, ಅಂಕುಶ ನುಗ್ಗೆ ಮೊಸರು, ಬೆಲ್ಲ ತುಪ್ಪ ವಡೆ 6, ಬಾಳೇಹಣ್ಣು, ಗುಗ್ಗರಿ ಪಟ 4, ತಾಂಬೂಲ, ದಕ್ಷಿಣೆ 13, ಕುರಿದಾಯ, ಹಣ 1, ಬಿಳಿ ಹೂ

ಗಂಧಾಕ್ಷತೆಗಳಿಂದ ಪೂಜಿಸಿ, "ಓಂ ನಮೋ ಭಗವತೀ ಶೃಂಗಪಿಂಗಳೆ ಏಹಿ ಏಹಿ ಬಾಲಕಂ






ಮುಂಚ ಮುಂಚ ಸ್ವಾಹಾ" ಎಂದು ಚೀಟಿ ಬರೆದು ಇರಿಸಿ, ಬಡಗಲು ತಾಳೇ ಮರದಡಿಯಲ್ಲಿ ಮೂರು ದಿನ ಬಲಿಯಂ ಮಡಗಿ, ನೀರು ಪ್ರೋಕ್ಷಿಸಿ ಕಹಿ, ಕರಡಿ ಕೂದಲು ಶಿಶುವಿಗೆ ಧೂಪ ಹಾಕಿ, ಈ ಯಂತ್ರ ಕಟ್ಟುವುದು.

ದಿನ 12, ತಿಂಗಳು 12, ವರ್ಷ 12 ಆದ ಮಗುವಿಗೆ "ಜ್ವಲಿನಿ" ಎಂಬ ದೇವತೆ ಹಿಡಿಯುವಳು. ಇದಕ್ಕೆ ಬಲಿ ಹಾಲುವೆ ಮಣ್ಣು ತಂದು ಬೊಂಬೆಯಂ ಮಾಡಿ, ನೇಗಿಲು ಹಿಡಿಸಿ, ಕಾವಿವಸ್ತ್ರ, ಮೊಸರನ್ನ, ತುಪ್ಪ, ಡಲಸಂದಿ, ಗುಗ್ಗರಿ ಸೂಸಲು, ಹಾಲು ಪಾಯಸ, ತೆಂಗಿನಕಾಯಿ 2, ಬಾಳೇಹಣ್ಣು 8, ಪಟ 4, ದೀಪ 4, ತಾಂಬೂಲ ದಕ್ಷಿಣೆ 3, ಜನಿವಾರ, ಬಿಳಿ ಹೂವು ಗಂಧಾಕ್ಷತೆಗಳಿಂದ ಪೂಜಿಸಿ, "ಓಂ ನಮೋ ಭಗವತಿ ಜ್ವಲಿನಿ ಏಹಿ ಏಹಿ ಬಾಲಕಂ ಮುಂಚ ಮುಂಚ ಸ್ವಾಹಾ" ಎಂದು ಚೀಟಿ ಬರೆದು ಪಡವಲಾಗಿ ದೇವ ಕಣಿಗಲ ಗಿಡದ ಕೆಳಗೆ 3 ಮಡಗಿ, ಪಂಚಪಲ್ಲವದ ನೀರು ಪ್ರೋಕ್ಷಿಸಿ ಹುಲಿಯುಗುರು ಧೂಪ ಹಾಕಿ ಬ್ರಹ್ಮದಂಡಿ






ಹಿಪ್ಪಲಿಗಂಧ ವೈಸವರಿ ಈ ಯಂತ್ರವನ್ನು ಕಟ್ಟುವುದು.

ದಿನ 13, ತಿಂಗಳು 13, ವರ್ಷ 13 ಆದ ಮಗುವಿಗೆ "ಚಕ್ರಿಣಿ" ಎಂಬ ದೇವತೆ ಹಿಡಿಯುವಳು. ಇದರ ಚೇಷ್ಟೆ ಜ್ವರ, ಕೈಕಾಲು ಕುಣಿಸುವುದು, ಮೈ ಶೀತವಾಗುವುದು. ಇದಕ್ಕೆ ಬಲಿ ಹಾಲುವೆ ಮಣ್ಣಿನಿಂದ ಬೊಂಬೆಯಂ ಮಾಡಿ, ದಂಡಂ ಇರಿಸಿ, ಕರಿವಸ್ತ್ರ ಪಾಯಸ, ತುಪ್ಪ, ಹಲಸೊಂದಿ, ತುಪ್ಪ, ಎಳ್ಳು, ಸೂಸಲು, ಕಡಲೆ ಮೇಲೋಗರ, ಮೊಸರನ್ನ, ಕಬ್ಬಿನ ಹಾಲು,

| | | |
|---|---|---|
| ಕ್ಲೀಂ | ಕ್ಲೀಂ | ಕ್ಲೀಂ |
| ವಂ | ವಂ | ಜಂ |
| ಈ | ಈ | ಈ |

4 ತಾಂಬೂಲ, ದಕ್ಷಿಣೆ 5 ಜನಿವಾರ 1, ತೆಂಗಿನಕಾಯಿ 2, ಬಾಳೇಹಣ್ಣು 5, ಹೋಳಿಗೆ 3, ಗಂಧಾಕ್ಷತೆಯಿಂದ ಪೂಜಿಸಿ, "ಓಂ ನಮೋ ಭಗವತಿ ಚಕ್ರಿಣಿ ಏಹಿ ಏಹಿ ಮುಂಚ ಮುಂಚ ಸ್ವಾಹಾ" ಎಂದು ಚೀಟಿ ಬರೆದು ಇರಿಸಿ, ಮಂಡಲ ದಿಕ್ಕಿನಲ್ಲಿ ನೆಲ್ಲಿ ಮರದಡಿಯಲ್ಲಿ ದಿನ

ಬಲಿಯಂ ಮಡಗಿ, ಪಂಚಪಲ್ಲವದ ನೀರು ಪ್ರೋಕ್ಷಿಸಿ, ಬೇವಿನ ಸೊಪ್ಪು ಕಡಲೆಯ ಗೊಂಟು ಧೂಪ ಹಾಕಿ ಹುರುಳಿ ಸಿಪ್ಪೆ ಬಜೆ, ಗಂಧ ಲೇಪ ಹಾಕಿ ಈ ಯಂತ್ರವನ್ನು ಕಟ್ಟುವುದು.

ದಿನ 14, ತಿಂಗಳು 14, ವರ್ಷ 14 ಆದ ಮಗುವಿಗೆ "ಕೇಸರಣಿ" ಎಂಬ ದೇವತೆ ಹಿಡಿಯುವಳು. ಅದರ ಚೇಷ್ಟೆ ನೆಲದ ಮೇಲೆ ಬಿದ್ದು ಹೊರಳುವುದು, ಜ್ವರ, ಕಣ್ಣು ನೋವು, ಮಲಮೂತ್ರ ಕೆಂಪಾಗುವುದು, ಹೊಟ್ಟೆ ನೋವು. ಇದಕ್ಕೆ ಬಲಿ ಕಾಲುವೆ ಮಣ್ಣು ತಂದು, ಬೊಂಬೆಯಂ ಮಾಡಿ, ವಸ್ತ್ರ ಉಡಿಸಿ ಮೊಲೆ ಕೋಣವಂ ಬರೆದು ಆ ಕೋಣದಲಿ ಮಡಗಿ ಕಡಲೆ ಗುಗ್ಗರಿ, ಪಾಯಸ, ಹುಸಲು ಉದ್ದಿನ ತೊವ್ವೆ, ತೆಂಗಿನಕಾಯಿ, 2 ಬಾಳೆಹಣ್ಣು, ತಾಂಬೂಲ, ದಕ್ಷಿಣೆ 4, ಮೊಸರು ಕಡಲೆ ಹೊಸಚಿಕಿ, ಇವುಗಳಿಂದ ಪೂಜಿಸಿ "ಓಂ ನಮೋ ಭಗವತಿ ಕೇಸರಿಫಣಿ ಏಹಿ ಏಹಿ ಬಾಲಕ ಮುಂಚ ಮುಂಚ ಸ್ವಾಹಾ" ಎಂದು ಚೀಟಿ ಬರೆದು ಇರಿಸಿ ಮೂಡಲ ದಿಕ್ಕಿನಲ್ಲಿ ಬನ್ನಿ ಕೆಳಗೆ ದಿನ ಬಲಿಯು ಹಾಕಿ ಈ ಯಂತ್ರವನ್ನು ಕಟ್ಟುವುದು.

| | | | |
|---|---|---|---|
| ಯಂ | ಹ್ರೀಂ | ರ | ಮ |
| ಹ್ರೀಂ | ಶ್ರೀ | ಶ್ರೀಂ | ರ |

ದಿನ 15, ತಿಂಗಳು 15, ವರ್ಷ 15 ಆದ ಮಗುವಿಗೆ "ರೇವಂದಿನೀ" ಎಂಬ ದೇವತೆ ಹಿಡಿಯುವಳು. ಇದರ ಚೇಷ್ಟೆ, ಜ್ವರ, ವಾಂತಿ, ಕೆಮ್ಮು ಅರಗಣ್ಣು ಹಿಡಿಸಿ ಕಪ್ಪುವಸ್ತ್ರ, ಹುಗ್ಗಿ, ಮೊಸರು, ಹಪ್ಪಳ 8, ತುಪ್ಪ ಪಟ 4, ತಾಂಬೂಲ ದಕ್ಷಿಣೆ ಗಂಧಾಕ್ಷತೆಗಳಿಂದ ಪೂಜಿಸಿ "ಓಂ ನಮೋ ಭಗವತಿ ರೇವೆಂದಿನೀ ಏಹಿ ಏಹಿ ಬಾಲಕಂ ಮುಂಚ ಮುಂಚ ಸ್ವಾಹಾ" ಎಂದು ಚೀಟಿ ಬರೆದು ಇರಿಸಿ ನೈರುತ್ಯ ದಿಕ್ಕಿನಲ್ಲಿ ಯಲಚಿ ಮರದ ಕೆಳಗೆ ದಿನ ಬಲಿಯಂ ಮಡಗಿ ಪಂಚಪಲ್ಲವದ ನೀರು ಪ್ರೋಕ್ಷಿಸಿ ಬಳಿ ಸಾಸುವೆ ಧೂಪ ಹಾಕಿ, ಬಜೆ ಗಂಧ ಲೇಪ ಹಾಕಿ ಯಂತ್ರ ಕಟ್ಟುವುದು.

| | | |
|---|---|---|
| ಅ | ರ | ಅಃ |
| ಇ | ವ | ಅ |

ದಿನ 16, ತಿಂಗಳು 16, ವರ್ಷ 16 ಆದ ಶಿಶುವಿಗೆ "ಶಂಖಿನೀ" ಎಂಬ ದೇವತೆ ಹಿಡಿಯುವಳು. ಇದರ ಚೇಷ್ಟೆ ಜ್ವರ, ಕೆಮ್ಮು ಭೇದಿ, ಇಂಗಣ್ಣು ಮುಚ್ಚುವುದು. ಇದಕ್ಕೆ ಬಲಿ ಇದ್ದಿಲು ಪುಡಿಯಲ್ಲಿ ಬೊಂಬೆಯಂ ಮಾಡಿ, ನೀಲ ವಸ್ತ್ರವಂ ಉಡಿಸಿ, ಹಸ್ತದಲ್ಲಿ ದಂಡವಂ ಹಿಡಿಸಿ, ಗುಡಾನ್ನ ಮೊಸರು ವಡೆ 4, ದೀಪ 8, ಬಾಲಕ ದಕ್ಷಿಣೆ 4, ಗಂಧಾಪುಷ್ಪಾಕ್ಷತೆಗಳಿಂದ ಪೂಜಿಸಿ, "ಓಂ ನಮೋ ಭಗವತೀ ಶಂಖಿನೀ ಏಹಿ ಏಹಿ ಬಾಲಕಂ ಮುಂಚ ಮುಂಚ ಸ್ವಾಹಾ" ಎಂದು ಚೀಟಿ ಬರೆದು ಇರಿಸಿ, ಈಶಾನ್ಯ ದಿಕ್ಕಿನಲ್ಲಿ ನಲ್ಲಿ ಮರದ ಕೆಳಗೆ 3 ದಿನ ಬಲಿಯಂ ಇರಿಸಿ ನೀರು ಪ್ರೋಕ್ಷಿಸಿದ ಬಳಿಕ ಗುಗ್ಗಳ ಧೂಪ ಹಾಕಿ, ಆನೆ ದಂತದಿಂದ ಗಂಧ ತೇದು ಲೇಪ ಹಾಕುವುದು. ಪಂಚಪಲ್ಲವದ ನೀರು ಅಂದರೆ ಅತ್ತಿ, ಆಲಗೋಣಿ, ಬಸರಿ ಈ ಎಲೆಗಳನ್ನು ನೀರಿನಲ್ಲಿ ಹಾಕುವುದು, ಅನಂತರ ಯಂತ್ರ ಕಟ್ಟುವುದು.

| | | | |
|---|---|---|---|
| ರ | ರ | ರ • | ರ |
| ಕೆ | ಶ | ಟ | ವ |
| ಶ | ರ | ಯಂ | ರ |
| ಪ | ರ | ಏ | ರ |

ಬಾಲಗ್ರಹ ಚಿಕಿತ್ಸೆ ಸಮಾಪ್ತ

# ಗರ್ಭಿಣೀ ಚಿಕಿತ್ಸೆ

ಗರ್ಭವಾದ 2ನೇ ತಿಂಗಳಲ್ಲಿ "ಕಿಂಕಿಣಿ" ಎಂಬ ದೇವತೆ ಹಿಡಿಯುವಳು. ಇದರ ಲಕ್ಷಣ ಹೊಟ್ಟೆ ಕಿವುಚಿದಂತೆ ಆಗುವುದು. ಇದಕ್ಕೆ ಬಲಿ ಮಣ್ಣಿನಿಂದ ಬೊಂಬೆಯಂ ಮಾಡಿ, ವಸ್ತ್ರಂ ತೊಡಿಸಿ, ಕೆಂಪು-ಅನ್ನ, ಗಂಧಾಕ್ಷತೆ ಪುಷ್ಪಗಳಿಂದ ಅಷ್ಟ ವಿಧಾರ್ಚನೆ ಮಾಡಿ, "ಓಂ ನಮೋ ಭಗವತೀ ಕಿಂಕಿಣೀ ಏಹಿ ಏಹಿ ಬಲಿಂ ಗ್ರಹಾಣೀ ಗರ್ಭಿಣೀ ಮುಂಚ ಮುಂಚ ಸ್ವಾಹಾ" ಎಂದು ಚೀಟಿ ಬರೆದು ಮಂತ್ರಿಸಿ 4ದಾರಿ ಕೂಡಿದ ಸ್ಥಳದಲ್ಲಿ ಬಲಿಯಂ ಹಾಕುವುದು. ಇದಕ್ಕೆ ಔಷಧ: ತಾವರೆಹೂವಿನ ಕುಸುಮ ನೈದಿಲೆ ಗೆಡ್ಡೆ, ಶ್ರೀಗಂಧ, ಕರೀ ಹಸುವಿನ ಹಾಲಿನಲ್ಲಿ ಅರೆದು ಕುಡಿಸುವುದು.

3ನೇ ತಿಂಗಳಲ್ಲಿ "ಪೌಮಾನುಷಿ" ಎಂಬ ದೇವತೆ ಹಿಡಿಯುವಳು. ಇದರ ಲಕ್ಷಣ ಕೈಕಾಲು ನೋವು, ವೇದನೆ, ಶರೀರ ಲಂಪಟ. ಇದಕ್ಕೆ ಬಲಿ, ಒಂದು ಪಾವು ಹಾಲು, ಪರಮಾನ್ನ, ಜೋಳದ ಅರಳಟ್ಟು ಇದಂ ಕಲಸಿ, ಪೂಜಿಸಿ "ಓಂ ನಮೋ ಭಗವತಿ ಪೌಮಾನುಷಿ ಏಹಿ ಏಹಿ ಗರ್ಭಿಣೀ ಮುಂಚ ಮುಂಚ ಸ್ವಾಹಾ" ಎಂದು ಚೀಟಿ ಬರೆದು, ಪೂಜೆಯಂ ಮಾಡಿ, ದೇವಸ್ಥಾನದ ಹೊಳೆಯಲ್ಲಿ ಇರಿಸುವುದು. ಇದಕ್ಕೆ ಔಷಧಿ - ತಾವರೆ ಹೂವಿನ ಕುಸುಮ, ಲಾವಂಚ ಹಾಲಿನಲ್ಲಿ ಅರೆದು ಕುಡಿಸುವುದು.

4ನೇ ತಿಂಗಳಿನಲ್ಲಿ "ಕಾಳಿ" ಎಂಬ ದೇವತೆ ಹಿಡಿಯುವಳು. ಇದರ ಲಕ್ಷಣ ಕಣ್ಣು ನೋವು, ಹೊಟ್ಟೆ ಬೇನೆ, ಆಮು ಬೀಳುವುದು. ಇದಕ್ಕೆ ಬಲಿ ಒಂದು ಪಾವು ಹಾಲು, ಹೆಸರು, 3ಪಾವು ತೊಗರಿಬೇಳೆ ಇವು ಹುಳಿ ಮಾಡಿ ಎಮ್ಮೆಯ ಹಾಲು, ಪರಮಾನ್ನ, 3ಬಗೆ ಪಲ್ಯ, ಅಷ್ಟ ವಿಧಾರ್ಚನೆಯಂ ಮಾಡಿ, "ಓಂ ನಮೋ ಭಗವತಿ ಕಾಳಿ ಏಹಿ ಏಹಿ ಗರ್ಭಿಣೀ ಮುಂಚ ಮುಂಚ ಸ್ವಾಹಾ" ಎಂದು ಚೀಟಿ ಬರೆದು, ಪೂಜೆಯಂ ಮಾಡಿ, ಸ್ಮಶಾನದಲ್ಲಿ ಬಲಿಯಂ ಹಾಕುವುದು. ಇದಕ್ಕೆ ಔಷಧಃ ಶ್ರೀಗಂಧ ನೈದಿಲೆಯುಲ್ಲಿ ಹೂ ಹಾಲಿನಲ್ಲಿ ಅರೆದು ಕುಡಿಸುವುದು.

5ನೇ ತಿಂಗಳಲ್ಲಿ "ಮಹಾದೇವಿ" ಎಂಬ ದೇವತ ಹಿಡಿಯುವಳು. ಇದರ ಲಕ್ಷಣ ಮೈ ನೋವು, ತಾಪ ಇದಕ್ಕೆ ಬಲಿ 5ವರ್ಣದ ಅನ್ನ, ಕಿರಿಸೊಪ್ಪಿನ ಪಲ್ಯ, ಬಾಳೇ ಹಣ್ಣು, ಬಿಳಿ ಹೂ ಪೂಜೆಯಂ ಮಾಡಿ "ಓಂ ನಮೋ ಭಗವತಿ ಮಹಾದೇವಿ ಏಹಿ ಏಹಿ ಗರ್ಭಿಣೀ ಮುಂಚ ಮುಂಚ ಸ್ವಾಹಾ" ಎಂದು ಚೀಟಿ ಬರೆದು ಮಂತ್ರಿಸಿ, ಒಂದು ಶಿವಸ್ಥಾನದಲ್ಲಿ ಉತ್ತರ ದಿಕ್ಕಿನಲ್ಲಿ ಬಲಿಯಂ ಹಾಕುವುದು. ಇದಕ್ಕೆ ಔಷಧ ಆವರಿಕೆ ಹೂ ತಾವರೆಗೆಡ್ಡೆ ಹಾಲಿನಲ್ಲಿ ಕುಡಿಸುವುದು.

6ನೇ ತಿಂಗಳಲ್ಲಿ "ಊರಕಾಳಿ" ಎಂಬ ದೇವತೆ ಹಿಡಿಯುವಳು. ಇದರ ಲಕ್ಷಣ ಮುಂ ಬೀಳುವುದು, ಹೊಟ್ಟೆ ನೋವು, ಇದಕ್ಕೆ ಬಲಿ1ಪಾವು ಅಕ್ಕಿ, 2ಪಾವು ಬೇಳೆ ಪಲ್ಯ ಮಾಡಿ, ಪೂಜೆಯಂ ಮಾಡಿ, "ಓಂ ನಮೋ ಭಗವತಿ ಊರಕಾಳಿ ಏಹಿ ಏಹಿ ಗರ್ಭಿಣೀ ಮುಂಚ ಮುಂಚ ಸ್ವಾಹಾ" ಎಂದು ಚೀಟಿ ಬರೆದು ಮಂತ್ರಿಸಿ, ಊರಿಗೆ ಉತ್ತರ ದಿಕ್ಕಿನಲ್ಲಿ ತಲುಪಿಸಿ ವನದಲ್ಲಿ ಬಲಿಯಂ ಹಾಕುವುದು. ಇದಕ್ಕೆ ಔಷಧಿ - ಸಹದೇವಿ ಸೊಪ್ಪಿನ ರಸದಲ್ಲಿ [illegible] ಹಾಲಿನಲ್ಲಿ ಅರೆದು ಕುಡಿಸುವುದು.

7ನೇ ತಿಂಗಳಲ್ಲಿ "ಹುಬ್ಬು ಕೊಂಡಿ" ಎಂಬ ದೇವತೆ ಹಿಡಿಯುವಳು. ಇದರ ಲಕ್ಷಣ ಅತಿ ಕೋಪ, ಮೈ ಭಾರವು, ಉದ್ದಿನ ವಡೆ ತಿನ್ನುವ ಇಚ್ಛೆ, ತಲೆ ನೋವು - ಇದಕ್ಕೆ ಬಲಿ — 2ಪಾವು ಅಕ್ಕಿ, 2ಪಾವು ಎಳ್ಳು, ಹಾಲು ಪಾಯಸ ಪೂಜೆಯಂ ಮಾಡಿ, "ಓಂ ನಮೋ ಭಗವತಿ ಹುಬ್ಬು ಕೊಂಡಿ ಏಹಿ ಏಹಿ ಗರ್ಭಿಣೀ ಮುಂಚೆ ಮುಂಚೆ ಸ್ವಾಹಾ" ಎಂದು ಚೀಟಿ ಬರೆದು, ಮಂತ್ರಿಸಿ, ಚೌಡೇಶ್ವರಿ ದೇವಸ್ಥಾನದ ಉತ್ತರ ದಿಕ್ಕಿನ ಪೌಳಿಯಲ್ಲಿ ಇರಿಸುವುದು. ಇದಕ್ಕೆ ಔಷಧ — ಲಾಮಂಚ ಹಿಪ್ಪಲಿ, ತಾವರೆ ಹೂವು ಹಾಲಿನಲ್ಲಿ ಅರೆದು ಕುಡಿಸುವುದು.

8ನೇ ತಿಂಗಳಲ್ಲಿ "ನರಮುಂಡಿ" ಎಂಬ ದೇವತೆ ಹಿಡಿಯುವಳು. ಇದರ ಲಕ್ಷಣ ಮೈ ಕೃಶವಾಗುವುದು. ಕಣ್ಣು ನೋವು, ಇದಕ್ಕೆ ಬಲಿ — ಅಕ್ಕಿ, ಉದ್ದಿನ ಬೇಳೆ ಹುಗ್ಗಿ ಪೂಜೆಯಂ ಮಾಡಿ "ಓಂ ನಮೋ ಭಗವತಿ ನರಮುಂಡಿ ಏಹಿ,ಏಹಿ ಗರ್ಭಿಣೀ ಮುಂಚೆ ಮುಂಚೆ ಸ್ವಾಹಾ" ಎಂದು ಚೀಟಿ ಬರೆದು, ದಾರಿಯಲ್ಲಿ ಬಲಿಯಂ ಹಾಕುವುದು. ಇದಕ್ಕೆ ಔಷಧಿ — ಬೆಳ್ಳದ ಪಟ್ಟೆ ಹಾಲಿನಲ್ಲಿ ಅರೆದು, ಕುಡಿಸುವುದು.

9ನೇ ತಿಂಗಳಲ್ಲಿ "ಕಪಾಲಿ" ಎಂಬ ದೇವತೆ ಹಿಡಿಯುವಳು. ಇದರ ಲಕ್ಷಣ ತಲೆ ನೋವು. ಮೈ ಭಾರ. ಇದಕ್ಕೆ ಬಲಿ 2ಪಾವು ಅಕ್ಕಿ, ಒಂದು ಪಾವು ಆಡಿನ ಹಾಲು ಪರಮಾನ್ನ, ಬೂರ್ಗದ ಗೆಡ್ಡೆ ಪಲ್ಯದಿಂದ ಪೂಜೆಯಂ ಮಾಡಿ "ಓಂ ನಮೋ ಭಗವತಿ ಕಪಾಲಿ ಏಹಿ ಏಹಿ ಗರ್ಭಿಣೀ ಮುಂಚೆ ಮುಂಚೆ ಸ್ವಾಹಾ" ಎಂದು ಚೀಟಿ ಬರೆದು, ಪೂಜೆಯಂ ಮಾಡಿ, ನಡುದಾರಿಯಲ್ಲಿ ಬಲಿ ಹಾಕುವುದು. ಇದಕ್ಕೆ ಔಷಧ—ತಾವರೆ ಹೂ ಲಾಮಂಚ ಹಾಲಿನಲ್ಲಿ ಅರೆದು ಕುಡಿಸುವುದು.

10ನೇ ತಿಂಗಳಲ್ಲಿ "ಪೇಶಿ" ಎಂಬ ದೇವತೆ ಹಿಡಿಯುವಳು. ಇದರ ಲಕ್ಷಣ ಶರೀರದಲ್ಲಿ ಸ್ಮರಣೆಯಿಲ್ಲದಿರುವುದು, ಆಕಳಿಕೆ, ಸಣ್ಣದಾಗಿ ಹೊಟ್ಟೆ ನೋವು. ಇದಕ್ಕೆ ಬಲಿ ಸಕ್ಕರೆ ಹಾಲು ಪಾಯಸ, ಬಾಳೇಹಣ್ಣು 1, ಮೊಸರನ್ನದಿಂದ ಪೂಜೆಯಂ ಮಾಡಿ "ಓಂ ನಮೋ ಭಗವತಿ ಪೇಶಿ ಏಹಿ ಏಹಿ ಗರ್ಭಿಣೀ ಮುಂಚೆ ಮುಂಚೆ ಸ್ವಾಹಾ" ಎಂದು ಚೀಟಿ ಬರೆದು, ಮಂತ್ರಿಸಿ, ಊರು ಮಧ್ಯದಲ್ಲಿ ಬಲಿಯಂ ಹಾಕುವುದು. ಇದಕ್ಕೆ ಔಷಧ — ಲಾಮಂಚ ಬೇಲದ ಪಟ್ಟೆ ಹಾಲಿನಲ್ಲಿ ಅರೆದು ಕುಡಿಸುವುದು.

|| ಇತಿ ಗರ್ಭಿಣೀ ಚಿಕಿತ್ಸೆ ಸಂಪೂರ್ಣಂ ||

5.00